## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 436
ಸದಸ್ಯರ ಹೆಸರು : ಶ್ರೀ ಬಿ.ಕೆ. ಹರಿಪ್ರಸಾದ್
(ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 04.02.2021
ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿರವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರಗಳು |
|---|---|---|
| ಅ | ಅತಿ ವೇಗವಾಗಿ ಬೆಳೆಯುತ್ತಿರುವ ಬೆಂಗಳೂರು ನಗರದ ಅವಶ್ಯಕತೆಗಳನ್ನು ಪೂರೈಸಲು ಬಿ.ಡಿ.ಎ.ಮುಂದಿರುವ ಯೋಜನೆಗಳೇನು: | ಸಾರ್ವಜನಿಕರ ಸುಗಮ ಸಂಚಾರಕ್ಕಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ತುಮಕೂರು ರಸ್ತೆಯಿಂದ ಬಳ್ಳಾರಿ ರಸ್ತೆ ಹಾಗೂ ಹಳೇ ಮದ್ರಾಸ್ ರಸ್ತೆಯ ಮೂಲಕ ಹಾದು ಹೋಗಿ ಹೊಸೂರು ರಸ್ತೆಯವರೆಗೆ 65.5 ಕಿ.ಮೀ ಉದ್ದ ಮತ್ತು 100 ಮೀ ಅಗಲದ ಪೆರಿಫೆರಲ್ ರಿಂಗ್ ರಸ್ತೆಯನ್ನು ನಿರ್ಮಾಣ ಮಾಡಲು ಉದ್ದೇಶಿಸಲಾಗಿದೆ.<br><br>ಡಾ.ಶಿವರಾಮಕಾರಂತ ಬಡಾವಣೆಯನ್ನು ರಚಿಸಲು ಭೂಸ್ವಾಧೀನ ಪ್ರಕ್ರಿಯೆಯು ಜಾರಿಯಲ್ಲಿದ್ದು, ಭೂಸ್ವಾಧೀನ ಪ್ರಕ್ರಿಯೆ ಮುಕ್ತಾಯಗೊಂಡ ನಂತರ ಬಡಾವಣೆ ರಚಿಸಿ ಸಾರ್ವಜನಿಕರಿಗೆ ಹಂಚಿಕೆ ಮಾಡಲು ಉದ್ದೇಶಿಸಲಾಗಿದೆ. |
| ಆ | ಹೊಸ ಬಡಾವಣೆಗಳನ್ನು ರಚಿಸಲು ಭೂ ಸ್ವಾಧೀನ ಮಾಡಿಕೊಳ್ಳುವ ಯಾವುದಾದರೂ ಪ್ರಸ್ತಾವನೆ ಇದೆಯೇ: | ಅತಿ ವೇಗವಾಗಿ ಬೆಳೆಯುತ್ತಿರುವ ಬೆಂಗಳೂರು ನಗರದ ಅವಶ್ಯಕತೆಗಳನ್ನು ಪೂರೈಸಲು ಡಾ। ಶಿವರಾಮಕಾರಂತ ಬಡಾವಣೆಯನ್ನು ಸುಮಾರು 3546 ಎಕರೆ 12 ಗುಂಟೆ ಜಮೀನಿನಲ್ಲಿ ನಿರ್ಮಿಸಲು ಅಂತಿಮ ಅಧಿಸೂಚನೆಯನ್ನು ದಿನಾಂಕ: 29.10.2018 ರಂದು ಹೊರಡಿಸಲಾಗಿದೆ. ಈ ಬಡಾವಣೆ ರಚನೆಗಾಗಿ ತ್ವರಿತವಾಗಿ ಭೂಸ್ವಾಧೀನ ಪಡಿಸಿಕೊಳ್ಳಲು ಭೂಸ್ವಾಧೀನ ಪ್ರಕ್ರಿಯೆಯು ಜಾರಿಯಲ್ಲಿರುತ್ತದೆ.<br><br>ಮುಂದುವರೆದು, ಅರ್ಕಾವತಿ ಮುಂದುವರೆದ ಬಡಾವಣೆಯನ್ನು ಸುಮಾರು 450 ಎಕರೆ ವಿಸ್ತೀರ್ಣದಲ್ಲಿ ರಚಿಸಲು ಪ್ರಾಧಿಕಾರವು ಯೋಜಿಸಿದೆ. ಈ ಕುರಿತು ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರದ |

| | | |
|---|---|---|
| | | ಅನುಮತಿ ಮತ್ತು ಮಂಜೂರಾತಿಯನ್ನು ಕೋರಿ ದಿನಾಂಕ: 30.12.2020 ರಂದು ಪ್ರಸ್ತಾವನೆಯನ್ನು ಪ್ರಾಧಿಕಾರ ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |
| ಇ | ವೈಯಕ್ತಿಕ ನಿವೇಶನ ಹಂಚಿಕೆಗೆ ಬದಲಾಗಿ ಹೊಸದಾಗಿ ರಚಿಸಲಾದ ಬಡಾವಣೆಗಳಲ್ಲಿ ಬಿ.ಡಿ.ಎ. ಎತ್ತರದ ಬಹುಮಹಡಿ ಕಟ್ಟಡಗಳನ್ನು ನಿರ್ಮಿಸಲು ಯೋಜಿಸುತ್ತಿದೆಯೇ? | ಹೊಸದಾಗಿ ರಚಿಸಲಾದ ನಾಡಪ್ರಭು ಕೆಂಪೇಗೌಡ ಬಡಾವಣೆಯಲ್ಲಿ ಕೊಮ್ಮಘಟ್ಟ ಗ್ರಾಮದಲ್ಲಿ ಸರ್ವೆ ನಂ. 30 ರ ಜಮೀನಿನಲ್ಲಿ ಹಂತ-1 ರಲ್ಲಿ 2 ಬಿ.ಹೆಚ್.ಕೆ 216 ವಸತಿಗಳನ್ನು ಮತ್ತು ಹಂತ-2 ರಲ್ಲಿ 2 ಬಿ.ಹೆಚ್.ಕೆ 320 ವಸತಿಗಳನ್ನು ನಿರ್ಮಿಸಿಲಾಗಿದ್ದು, ಈಗಾಗಲೇ ಹಂಚಿಕೆ ಮಾಡಲಾಗುತ್ತಿದೆ.<br><br>ಸರ್ವೆ ನಂ, 115/1 ಮತ್ತು 115/2 ರಲ್ಲಿ ಹಂತ-1 ರಲ್ಲಿ 3 ಬಿ.ಹೆಚ್.ಕೆ 480 ವಸತಿಗಳನ್ನು, ಹಂತ-2 ರಲ್ಲಿ 2 ಬಿ.ಹೆಚ್.ಕೆ 360 ವಸತಿಗಳನ್ನು ಮತ್ತು ಹಂತ-3 ರಲ್ಲಿ 2 ಬಿ.ಹೆಚ್.ಕೆ 336 ವಸತಿಗಳನ್ನು ನಿರ್ಮಿಸಲಾಗುತ್ತಿದ್ದು ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.<br><br>ಹೊಸದಾಗಿ ನಿರ್ಮಿಸುವ ಬಡಾವಣೆಗಳಲ್ಲಿ ಸಾರ್ವಜನಿಕರ ಬೇಡಿಕೆಗಳನ್ನು ಆಧರಿಸಿ ಎತ್ತರದ ಬಹುಮಹಡಿ ಕಟ್ಟಡಗಳನ್ನು ನಿರ್ಮಿಸುವ ಬಗ್ಗೆ ನಿರ್ಧರಿಸಲಾಗುವುದು. |

ಸಂಖ್ಯೆ: ನಅಇ 11 ಬೆಂಭೂಸ್ವಾ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ